# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)
ಏಳನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 23ನೇ ಸೆಪ್ಟೆಂಬರ್, 2020
(ಸಮಯ: ಬೆಳಿಗ್ಗೆ 10.00 ಗಂಟೆಗೆ)

----

### 1. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

1) **ಶ್ರೀ ಬಿ.ಎಸ್. ಯಡಿಯೂರಪ್ಪ (ಮುಖ್ಯಮಂತ್ರಿಗಳು) ಅವರು:–**

ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ, ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು ನೀಡಿರುವ 74ನೇ ಸಂವಿಧಾನ ತಿದ್ದುಪಡಿ ಕಾಯ್ದೆಯ ಅನುಷ್ಠಾನದ ಮೇಲಿನ ಕಾರ್ಯನಿರ್ವಹಣಾ ಲೆಕ್ಕಪರಿಶೋಧನೆ ವರದಿಯನ್ನು (2020ನೇ ವರ್ಷದ ವರದಿ ಸಂಖ್ಯೆ:2) ಸಭೆಯ ಮುಂದಿಡುವುದು.

2) **ಶ್ರೀ ಲಕ್ಷ್ಮಣ ಸಂಗಪ್ಪ ಸವದಿ (ಉಪ ಮುಖ್ಯಮಂತ್ರಿಗಳು) ಅವರು:–**

ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ವಿಶೇಷ ವರದಿಯನ್ನು ಸಭೆಯ ಮುಂದಿಡುವುದು.

### 2. ವರದಿಯನ್ನೊಪ್ಪಿಸುವುದು

2019–20ನೇ ಸಾಲಿನ ಕರ್ನಾಟಕ ವಿಧಾನಸಭೆಯ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿಯ ವಿಶೇಷ ವರದಿಯನ್ನೊಪ್ಪಿಸುವುದು.

### 3. ವಿತ್ತೀಯ ಕಾರ್ಯಕಲಾಪಗಳು

**ಶ್ರೀ ಬಿ.ಎಸ್. ಯಡಿಯೂರಪ್ಪ (ಮುಖ್ಯಮಂತ್ರಿಗಳು) ಅವರು:–**

2020–21ನೇ ಸಾಲಿನ ಪೂರಕ ಅಂದಾಜುಗಳ ಮೊದಲನೇ ಕಂತಿನ ಬೇಡಿಕೆಗಳನ್ನು ಮಂಡಿಸುವುದು.

## 4. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆಗೆ ಉತ್ತರ

**ಶ್ರೀಯುತರುಗಳಾದ ಸಿದ್ದರಾಮಯ್ಯ, ಆರ್.ವಿ. ದೇಶಪಾಂಡೆ, ಡಿ.ಕೆ. ಶಿವಕುಮಾರ್, ಕೆ.ಜೆ. ಜಾರ್ಜ್, ಕೃಷ್ಣಬೈರೇಗೌಡ, ಡಾ. ಅಜಯ್ ಧರ್ಮಸಿಂಗ್, ದಿನೇಶ್ ಗುಂಡೂರಾವ್ ಇವರುಗಳು** – ರಾಜ್ಯವನ್ನು ಬಾಧಿಸುತ್ತಿರುವ ಕೊರೊನಾ ನಿರ್ವಹಣೆಯಲ್ಲಿ ಸರ್ಕಾರದ ವೈಫಲ್ಯ ಮತ್ತು ಆರೋಗ್ಯ ಸಂಬಂಧಿ ಸಾಮಗ್ರಿಗಳು ಹಾಗೂ ಔಷಧಿಗಳ ಖರೀದಿಯಲ್ಲಿ ನಡೆದಿದೆಯೆನ್ನಲಾದ ಅವ್ಯವಹಾರಗಳ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲಿನ ಚರ್ಚೆಗೆ ಸರ್ಕಾರದ ಉತ್ತರ.

## 5. ಶಾಸನ ರಚನೆ

### I. ವಿಧೇಯಕಗಳನ್ನು ಮಂಡಿಸುವುದು

1. **ಶ್ರೀ ಬಿ.ಎಸ್. ಯಡಿಯೂರಪ್ಪ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಆರ್ಥಿಕ ಹೊಣೆಗಾರಿಕೆ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

2. **ಶ್ರೀ ಬಿ.ಎಸ್. ಯಡಿಯೂರಪ್ಪ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

3. **ಶ್ರೀ ಬಿ.ಎಸ್. ಯಡಿಯೂರಪ್ಪ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ನಗರಪಾಲಿಕೆಗಳ (ಎರಡನೇ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

4. **ಶ್ರೀ ಬಿ.ಎಸ್. ಯಡಿಯೂರಪ್ಪ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಸರಕು ಮತ್ತು ಸೇವೆಗಳ ತೆರಿಗೆ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

5. **ಡಾ. ಅಶ್ವಥ ನಾರಾಯಣ ಸಿ.ಎನ್. (ಮಾನ್ಯ ಉಪ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಕಾಲೇಜು ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) (ನಿರಸನಗೊಳಿಸುವ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

6. **ಡಾ. ಅಶ್ವಥ ನಾರಾಯಣ ಸಿ.ಎನ್. (ಮಾನ್ಯ ಉಪ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) (ನಿರಸನಗೊಳಿಸುವ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

7. **ಡಾ. ಅಶ್ವಥ ನಾರಾಯಣ ಸಿ.ಎನ್. (ಮಾನ್ಯ ಉಪ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಮತ್ತು ಕೆಲವು ಇತರ ಕಾನೂನು (ಎರಡನೇ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

8. **ಶ್ರೀ ಕೆ.ಎಸ್. ಈಶ್ವರಪ್ಪ (ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

9. **ಶ್ರೀ ಆರ್. ಅಶೋಕ (ಮಾನ್ಯ ಕಂದಾಯ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಭೂ ಕಬಳಿಕೆ ನಿಷೇಧ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

10. **ಶ್ರೀ ಆರ್. ಅಶೋಕ (ಮಾನ್ಯ ಕಂದಾಯ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಸ್ಟಾಂಪು (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

... 4/ ..

**11. ಶ್ರೀ ಆರ್. ಅಶೋಕ (ಮಾನ್ಯ ಕಂದಾಯ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

**12. ಶ್ರೀ ಸಿ.ಸಿ. ಪಾಟೀಲ್ (ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## II. ವಿಧೇಯಕಗಳನ್ನು ಪರ್ಯಾಲೋಚಿಸುವುದು ಮತ್ತು ಅಂಗೀಕರಿಸುವುದು

**1. ಶ್ರೀ ಬಿ.ಎಸ್. ಯಡಿಯೂರಪ್ಪ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಲೋಕಾಯುಕ್ತ (ಎರಡನೇ ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**2. ಶ್ರೀ ಬಿ.ಎಸ್. ಯಡಿಯೂರಪ್ಪ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ (ಎರಡನೇ ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**3. ಶ್ರೀ ಬಿ.ಎಸ್. ಯಡಿಯೂರಪ್ಪ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಸಾರ್ವಜನಿಕ ವಲಯದ ಸಂಸ್ಥೆಗಳ ನೌಕರರ ಸೇವೆಗಳನ್ನು ಸಾರ್ವಜನಿಕ ಸೇವೆಗೆ ವಿಲೀನಗೊಳಿಸುವುದಕ್ಕೆ ನಿಷೇಧ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**4. ಡಾ. ಅಶ್ವಥ ನಾರಾಯಣ ಸಿ.ಎನ್. (ಮಾನ್ಯ ಉಪ ಮುಖ್ಯಮಂತ್ರಿಗಳು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

5. **ಶ್ರೀ ಬಿ. ಶ್ರೀರಾಮುಲು (ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಅಭಿವೃದ್ಧಿ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಸಾಂಕ್ರಾಮಿಕ ರೋಗಗಳ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

6. **ಶ್ರೀ ಆರ್. ಅಶೋಕ (ಮಾನ್ಯ ಕಂದಾಯ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಭೂ ಸುಧಾರಣೆಗಳ (ಎರಡನೇ ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

7. **ಶ್ರೀ ಜಗದೀಶ್ ಶೆಟ್ಟರ್ (ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

8. **ಶ್ರೀ ಕೆ.ಸಿ. ನಾರಾಯಣಗೌಡ (ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು) ಅವರು:–**

ಅ) 2020ನೇ ಸಾಲಿನ ಕರ್ನಾಟಕ ಪೌರಸಭೆಗಳ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 6. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ರಾಜಾ ವೆಂಕಟಪ್ಪ ನಾಯಕ್ ಅವರು** – ರಾಯಚೂರು ಜಿಲ್ಲೆ ಮಾನ್ವಿ ವಿಧಾನಸಭಾ ಕ್ಷೇತ್ರದ ತುಂಗಭದ್ರಾ ಎಡದಂಡೆ ಮುಖ್ಯ ಕಾಲುವೆ ಅಡಿಯಲ್ಲಿ ಬರುವ ವಿತರಣಾ ಕಾಲುವೆಯ ನೀರು ನಿರ್ವಹಣೆಯ ಸಲುವಾಗಿ ರೈತರ ಹಿತದೃಷ್ಟಿಯಿಂದ ಆನ್–ಆಫ್ ಪದ್ಧತಿಯನ್ನು ರದ್ದುಗೊಳಿಸುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

2) **ಶ್ರೀ ಕೆ.ವೈ. ನಂಜೇಗೌಡ ಅವರು** – ರಾಜ್ಯದಲ್ಲಿನ ಬಿಪಿಎಲ್ ಮತ್ತು ಅಂತ್ಯೋದಯ ಕಾರ್ಡುದಾರರ ಕುಟುಂಬಗಳಿಗೆ ಉಚಿತವಾಗಿ ಹಾಲಿನ ಪುಡಿ ಪ್ಯಾಕೆಟ್‌ಗಳನ್ನು ವಿತರಣೆ ಮಾಡುವ ಬಗ್ಗೆ ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

3) **ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ ಅವರು** – ವಿಜಯಪುರ ಜಿಲ್ಲೆಯಲ್ಲಿ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸುವ ಸಂಬಂಧ ಜಲಧಾರೆ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

4) **ಶ್ರೀ ಎ.ಎಸ್. ಪಾಟೀಲ್ (ನಡಹಳ್ಳಿ) ಅವರು** – ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ನೌಕರರ ಬೇಡಿಕೆಗಳ ಬಗ್ಗೆ ಮಾನ್ಯ ಉಪ ಮುಖ್ಯಮಂತ್ರಿಯವರ (ಸಾರಿಗೆ) ಗಮನ ಸೆಳೆಯುವುದು.

5) **ಶ್ರೀ ಶರಣಬಸಪ್ಪಗೌಡ ದರ್ಶನಾಪುರ್ ಅವರು** – ಯಾದಗಿರಿ ಜಿಲ್ಲೆಯ ಶಹಾಪುರ ತಾಲ್ಲೂಕಿನ ಸಗರ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

6) **ಶ್ರೀ ಸುಬ್ಬಾರೆಡ್ಡಿ ಎಸ್.ಎನ್. ಅವರು** – ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ ಕೆರೆ-ಕಾಲುವೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಪ್ರಾರಂಭ ಮಾಡುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

7) **ಶ್ರೀ ಕುಮಾರಸ್ವಾಮಿ ಹೆಚ್.ಕೆ. ಅವರು** – ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕಿನ ಹೆತ್ತೂರು ಪ್ರಥಮ ದರ್ಜೆ ಕಾಲೇಜನ್ನು ಬೇರೆಡೆಗೆ ಸ್ಥಳಾಂತರ ಮಾಡುವ ಬಗ್ಗೆ ಉಚ್ಛ ನ್ಯಾಯಾಲಯವು ನೀಡಿರುವ ತಡೆಯಾಜ್ಞೆಯನ್ನು ಜಾರಿಗೊಳಿಸದಿರುವ ಬಗ್ಗೆ ಮಾನ್ಯ ಉಪ ಮುಖ್ಯಮಂತ್ರಿಯವರ (ಉನ್ನತ ಶಿಕ್ಷಣ) ಗಮನ ಸೆಳೆಯುವುದು.

8) **ಶ್ರೀ ಪರಮೇಶ್ವರ್ ನಾಯಕ್ ಪಿ.ಟಿ. ಅವರು** – ಕೃಷಿ ಇಲಾಖೆಯ ಆತ್ಮ ಯೋಜನೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪದವೀಧರರನ್ನು ಖಾಯಂಗೊಳಿಸುವ ಬಗ್ಗೆ ಮಾನ್ಯ ಕೃಷಿ ಸಚಿವರ ಗಮನ ಸೆಳೆಯುವುದು.

9) **ಶ್ರೀ ಶಿವಶಂಕರ ರೆಡ್ಡಿ ಎನ್.ಹೆಚ್. ಅವರು** – ಗೌರಿಬಿದನೂರು ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಎಸ್.ಸಿ./ಎಸ್.ಟಿ. ಜನಾಂಗದವರಿಗೆ ಮಂಜೂರಾಗಿದ್ದ ಜಮೀನನ್ನು ಕಾನೂನುಬಾಹಿರವಾಗಿ ಖಾಸಗಿ ಕಂಪನಿಯವರು ನೋಂದಣಿ ಮಾಡಿಸಿಕೊಂಡಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

10) **ಶ್ರೀ ನರೇಂದ್ರ ಆರ್. ಅವರು** – ಚಾಮರಾಜನಗರ ಜಿಲ್ಲೆಯ ಹನೂರು ವ್ಯಾಪ್ತಿಯ ಪಾಳ್ಯಕೆರೆ ಏರಿ ಹಾಗೂ ತೂಬು ಹೊಡೆದು ಹೋಗಿರುವುದರಿಂದ ರೈತರು ಅನುಭವಿಸುತ್ತಿರುವ ಸಮಸ್ಯೆಗಳ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

ಎಂ.ಕೆ. ವಿಶಾಲಾಕ್ಷಿ
ಕಾರ್ಯದರ್ಶಿ(ಪ್ರ)

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
http://kla.kar.nic.in/assembly/lob/lob.htm